# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 245 (337) |
| ಸದಸ್ಯರ ಹೆಸರು | ಶ್ರೀ ಎಂ ಎ ಗೋಪಾಲಸ್ವಾಮಿ |
| ಉತ್ತರಿಸುವ ದಿನಾಂಕ | 03-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಲ್ಲಿರುವ ಮುಜರಾಯಿ ದೇವಾಲಯಗಳ ಸಂಖ್ಯೆ ಹಾಗೂ ಇವುಗಳ ಸ್ಥಿರಾಸ್ತಿ ಎಷ್ಟು; (ತಾಲ್ಲೂಕುವಾರು ಮತ್ತು ದೇವಸ್ಥಾನವಾರು ವಿವರ ನೀಡುವುದು) | ಹಾಸನ ಜಿಲ್ಲೆಯಲ್ಲಿ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಯಲ್ಲಿ ಒಟ್ಟು **2455** ದೇವಾಲಯಗಳಿದ್ದು, ವಿವರವು ಅಗಾಧ ಪ್ರಮಾಣದಲ್ಲಿದ್ದು, ಮಾನ್ಯ ಶಾಸಕರಿಗೆ ಪ್ರತ್ಯೇಕವಾಗಿ ಒಗಿಸಲಾಗುವುದು.<br><br>ಈ ದೇವಾಲಯಗಳಿಗೆ ಸೇರಿದ ಕೆಲವು ಆಸ್ತಿಗಳು ಧಾರ್ಮಿಕ ದತ್ತಿ ಆಯುಕ್ತರ ಸುತ್ತೋಲೆ: ಎ.ಡಿ.ಎಂ.13/ ಸಿಆರ್/53/2009-10 ದಿನಾಂಕ: 14-05-2010ರಂತೆ ಸರ್ಕಾರಿ ಜಮೀನೆಂದು ನಮೂದಾಗಿರುತ್ತದೆ.<br><br>ಉಳಿದಂತೆ ದೇವಾಲಯಗಳ ಸ್ಥಿರಾಸ್ತಿಗಳ ಸರ್ವೇ ಕಾರ್ಯ ಪ್ರಗತಿಯಲ್ಲಿರುವುದರಿಂದ ನಿಖರವಾಗಿ ಸ್ಥಿರಾಸ್ತಿ ವಿವರ ನೀಡಲು ಕಾಲಾವಕಾಶದ ಅವಶ್ಯಕತೆ ಇರುತ್ತದೆ. |
| ಆ) | ಈ ದೇವಾಲಯಗಳಿಗೆ ಸಂಬಂಧಿಸಿದ ಜಮೀನುಗಳು ಒತ್ತುವರಿಯಾಗಿರುವ ಪ್ರಕರಣಗಳೆಷ್ಟು; ಈ ಒತ್ತುವರಿಯಾಗಿರುವ ಜಮೀನುಗಳನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಪ್ರಕರಣವಾರು ವಿವರ ನೀಡುವುದು) | ಹಾಸನ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಅಧಿಸೂಚಿತ ದೇವಾಲಯಗಳ ಸ್ಥಿರಾಸ್ತಿ ಸರ್ವೇ ಕಾರ್ಯ ನಡೆಸಿ ಒತ್ತುವರಿಯಾಗಿರುವ ಜಮೀನುಗಳನ್ನು ತೆರವುಗೊಳಿಸಲು ಈ ಕೆಳಕಂಡ ಸರ್ಕಾರದ ಸೂಚನೆಯನ್ನು ಪಾಲಿಸಲಾಗುತ್ತಿದೆ.<br><br>1. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಮುಅಬಿ 2008 ದಿನಾಂಕ: 16.09.2008<br><br>ಮೇಲ್ಕಂಡ ಸರ್ಕಾರದ ಆದೇಶದಂತೆ ರಚನೆಯಾಗಿರುವ ಜಿಲ್ಲಾ ಟಾಸ್ಕ್ ಫೋರ್ಸ್ ಮುಂದೆ ಮಂಡಿಸಿ ಒತ್ತುವರಿ ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು, |

| | | |
|---|---|---|
| | | ಸದರಿ ದೇವಾಲಯಗಳ ಸ್ಥಿರಾಸ್ತಿಗಳ ಮೋಜಿಣಿ ಕಾರ್ಯ ಪ್ರಗತಿಯಲ್ಲಿರುವುದರಿಂದ ಒತ್ತುವರಿಯಾಗಿರುವ ಬಗ್ಗೆ ತಹಲ್‌ವರೆವಿಗೂ ಯಾವುದೇ ಮಾಹಿತಿ ಸ್ವೀಕೃತವಾಗಿರುವುದಿಲ್ಲ.<br>2 \| ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ರವರ ಅ.ಸ.ಪ ಸಂಖ್ಯೆ: ಮುಕಾ/2651/2020 ದಿನಾಂಕ: 11-12-2020<br>ಮೇಲ್ಕಂಡ ಮುಖ್ಯ ಕಾರ್ಯದರ್ಶಿಯವರ ಅ.ಸ.ಪ ಪತ್ರದಲ್ಲಿ ಧಾರ್ಮಿಕ ದತ್ತಿ ಇಲಾಖೆ ವ್ಯಾಪ್ತಿಯಲ್ಲಿರುವ ದೇವಾಲಯಗಳ, ಛತ್ರಗಳ ಜಮೀನು ಹಾಗೂ ಇತರೆ ಆಸ್ತಿಗಳ ದಾಖಲೀಕರಣವನ್ನು ಕನಿಷ್ಟ ಒಂದು ತಿಂಗಳಿಗೆ 05 ದೇವಾಲಯಗಳ ಜಮೀನುಗಳನ್ನು ಅಳತೆ ಮಾಡಿ, ಸ್ಥಳೀಯ ಸಂಸ್ಥೆ/ಕಂದಾಯ ಮತ್ತು ಭೂ ದಾಖಲೆಗಳಲ್ಲಿ ದಾಖಲೀಕರಣ ಮಾಡಿ. ಮಾಸಿಕ ಪ್ರಗತಿಯನ್ನು ಧಾರ್ಮಿಕ ದತ್ತಿ ಆಯುಕ್ತರಿಗೆ ಸಲ್ಲಿಸುವಂತೆ ಸೂಚಿಸಿದ್ದು, ಅದರಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿರುತ್ತದೆ. ಪ್ರಸ್ತುತ ಅಳತೆ ಕಾರ್ಯ ಪ್ರಗತಿಯಲ್ಲಿರುತ್ತದೆ.<br>ಅದರಂತೆ ಕ್ರಮ ವಹಿಸಲು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ದಿನಾಂಕ: 21-10-2020ರ ಅ.ಸ ಪತ್ರದಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಿರುತ್ತಾರೆ. |
| (ಇ) | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿರುವ ಮುಜರಾಯಿ ದೇವಾಲಯಗಳಿಂದ ಸರ್ಕಾರಕ್ಕೆ ಬಂದ ಆದಾಯವೆಷ್ಟು; ಈ ದೇವಸ್ಥಾನಗಳ ಉಸ್ತುವಾರಿ ಮತ್ತು ರಕ್ಷಣಾ ಕಾರ್ಯಗಳಾಗಿ ಖರ್ಚಾಗಿರುವ ಮೊತ್ತವೆಷ್ಟು? (ಪ್ರತಿ ದೇವಸ್ಥಾನದ ವಿವರ ನೀಡುವುದು) | ಕಳೆದ 03 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿರುವ 'ಎ' ಮತ್ತು 'ಬಿ' ವರ್ಗದ ಅಧಿಸೂಚಿತ ದೇವಾಲಯಗಳಿಂದ ಬಂದ ಆದಾಯ ಮತ್ತು ವೆಚ್ಚದ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ.<br>ಪ್ರವರ್ಗ 'ಸಿ' ವರ್ಗದ ದೇವಾಲಯಗಳಿಗೆ ಭಕ್ತಾಧಿಗಳು ಭೇಟಿ ನೀಡುವ ಸಂಖ್ಯೆ ಕಡಿಮೆ ಇರುತ್ತದೆ ಮತ್ತು 'ಸಿ' ವರ್ಗದ ಬಹುತೇಕ ದೇವಾಲಯಗಳಿಗೆ ವಾರ್ಷಿಕ ತಸ್ತೀಕ್/ವರ್ಷಾಸನ ಹೊರತು ಪಡಿಸಿ ಬೇರೆ ಆದಾಯವಿರುವುದಿಲ್ಲ. |

ಸಂಖ್ಯೆ: ಕಂಇ 27 ಮುಸಪ್ರ 2021

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

ಅನುಬಂಧ-

| ಕ್ರಮ ಸಂಖ್ಯೆ | ದೇವಾಲಯದ ವಿವರ | ವರ್ಷ | ಆದಾಯ (ರೂ.) | ವೆಚ್ಚ (ರೂ.) |
|---|---|---|---|---|
| 1 | 2 | 3 | 4 | 5 |
| 1 | ಶ್ರೀ ಹಾಸನಾಂಬ ದೇವಾಲಯ ಹಾಸನ ನಗರ. | 2017-18 | ₹ 4,06,06,398.00 | ₹ 1,10,16,267.00 |
| | | 2018-19 | ₹ 2,58,88,230.00 | ₹ 93,86,853.00 |
| | | 2019-20 | ₹ 3,19,64,011.00 | ₹ 1,10,99,088.00 |
| 2 | ಶ್ರೀ ಚೌಡೇಶ್ವರಿ (ಪುರದಮ್ಮ) ದೇವಾಲಯ, ಬೀಕನಹಳ್ಳಿ, ಹಾಸನ. | 2017-18 | ₹ 83,91,286.00 | ₹ 58,12,067.00 |
| | | 2018-19 | ₹ 1,03,00,383.00 | ₹ 79,77,473.00 |
| | | 2019-20 | ₹ 1,24,02,800.00 | ₹ 35,55,599.00 |
| 3 | ಶ್ರೀ ಚನ್ನಕೇಶವ ದೇವಾಲಯ, ಬೇಲೂರು. | 2017-18 | ₹ 2,71,55,000.00 | ₹ 2,05,30,821.00 |
| | | 2018-19 | ₹ 2,12,70,811.00 | ₹ 20,90,689.00 |
| | | 2019-20 | ₹ 2,84,47,660.00 | ₹ 1,88,65,798.00 |
| 4 | ಶ್ರೀನವಿಲೆ ನಾಗೇಶ್ವರ , ಚನ್ನರಾಯಪಟ್ಟಣ. | 2017-18 | ₹ 37,11,000.00 | ₹ 7,97,180.00 |
| | | 2018-19 | ₹ 53,61,084.00 | ₹ 10,44,996.00 |
| | | 2019-20 | ₹ 71,51,692.00 | ₹ 13,03,882.00 |
| 5 | ಶ್ರೀ ಮಾಲೇಕಲ್ಲು ತಿರುಪತಿ ವೆಂಕಟರಮಣ ಸ್ವಾಮಿ ದೇವಾಲಯ, ಅರಸೀಕೆರೆ. | 2017-18 | ₹ 35,67,997.00 | ₹ 25,06,312.00 |
| | | 2018-19 | ₹ 44,47,796.00 | ₹ 34,13,304.00 |
| | | 2019-20 | ₹ 47,13,945.00 | ₹ 31,28,234.00 |
| 6 | ಬಿಳಿಕಲ್ಲು ಶ್ರೀ ರಂಗನಾಥ ಸ್ವಾಮಿ ದೇವಾಲಯ, ಚಿಕ್ಕಹಲ್ಕೂರು, ಅರಸೀಕೆರೆ | 2017-18 | ₹ 17,39,826.00 | ₹ - |
| | | 2018-19 | ₹ 24,39,057.00 | ₹ 6,42,730.00 |
| | | 2019-20 | ₹ 19,82,283.00 | ₹ 12,13,171.00 |
| 7 | ಶ್ರೀ ಲಕ್ಷ್ಮೀ ದೇವಾಲಯ ಮಳಲಿ, ಹೊಳೆನರಸೀಪುರ. | 2017-18 | ₹ 17,82,244.00 | ₹ 3,67,749.00 |
| | | 2018-19 | ₹ 17,01,089.00 | ₹ 6,63,347.00 |
| | | 2019-20 | ₹ 16,61,167.00 | ₹ 10,19,045.00 |
| 8 | ಶ್ರೀ ಪುಷ್ಪಗಿರಿ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ, ಬೇಲೂರು | 2017-18 | ₹ 7,15,612.00 | ₹ 8,88,280.00 |
| | | 2018-19 | ₹ 6,05,270.00 | ₹ 1,89,551.00 |
| | | 2019-20 | ₹ 10,93,370.00 | ₹ 1,01,168.00 |
| 9 | ಶ್ರೀ ಕೆಂಚಾಂಬ ದೇವಾಲಯ, ಕೆಂಚಮ್ಮನ ಹೋಸಕೋಟೆ ಆಲೂರು | 2017-18 | ₹ 5,91,670.00 | ₹ 4,02,000.00 |
| | | 2018-19 | ₹ 6,38,130.00 | ₹ 4,02,000.00 |
| | | 2019-20 | ₹ 4,26,250.00 | ₹ 1,33,200.00 |